# ಕರ್ನಾಟಕ ವಿಧಾನ ಪರಿಷತ್ತು

1. ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ : 655
2. ಸದಸ್ಯರ ಹೆಸರು : ಶ್ರೀ ಅ. ದೇವೇಗೌಡ
3. ಉತ್ತರಿಸಬೇಕಾದ ದಿನಾಂಕ : 24-09-2020
4. ಉತ್ತರಿಸುವ ಸಚಿವರು : ಮಾನ್ಯ ಜಲಸಂಪನ್ಮೂಲ ಸಚಿವರು

| ಕ್ರ ಸಂ | ಪ್ರಶ್ನೆಗಳು | ಉತ್ತರಗಳು |
|---|---|---|
| ಅ | ಮಾಗಡಿ ತಾಲ್ಲೂಕು, ರಾಮನಗರ ಜಿಲ್ಲೆ, ಈ ತಾಲ್ಲೂಕಿಗೆ ಹೇಮಾವತಿ ನದಿಯಿಂದ ನಾಲೆಯ ಮೂಲಕ ಕೆರೆಗಳಿಗೆ ನೀರನ್ನು ಹರಿಸುವ ಕಾಮಗಾರಿಯು ಪ್ರಸ್ತುತ ಯಾವ ಹಂತದಲ್ಲಿದೆ; | ರಾಮನಗರ ಜಿಲ್ಲೆ, ಮಾಗಡಿ ತಾಲ್ಲೂಕಿಗೆ ಹೇಮಾವತಿ ನದಿಯಿಂದ ನಾಲೆಯ ಮೂಲಕ ಕೆರೆಗಳಿಗೆ ನೀರನ್ನು ಹರಿಸುವ ಯಾವುದೇ ಕಾಮಗಾರಿಯು ಪ್ರಸ್ತುತ ಕೈಗೊಂಡಿರುವುದಿಲ್ಲ.<br><br>ಬದಲಾಗಿ, ಹೇಮಾವತಿ ಯೋಜನೆಯ ತುಮಕೂರು ಶಾಖಾ ನಾಲೆ ಕಿ.ಮೀ. 192.30 ನಿಂದ ಮಾಗಡಿ ತಾಲ್ಲೂಕಿನ 211 ಮತ್ತು ಕುಣಿಗಲ್ ತಾಲ್ಲೂಕಿನ 66 ಗ್ರಾಮಗಳಿಗೆ ಕುಡಿಯುವ ನೀರನ್ನು ಒದಗಿಸುವ ಸಂಬಂಧ ಮಾಗಡಿ ತಾಲ್ಲೂಕಿನ 66 ಕೆರೆಗಳು, ಕುಣಿಗಲ್ ತಾಲ್ಲೂಕಿನ 17 ಕೆರೆಗಳಿಗೆ ನೀರನ್ನು ತುಂಬಿಸುವ ಶ್ರೀರಂಗ ಯೋಜನೆಯನ್ನು ರೂಪಿಸಲಾಗಿದ್ದು, ಕಾಮಗಾರಿ ಪ್ರಗತಿಯಲ್ಲಿದೆ (ಶೇ.30 ರಷ್ಟು ಆರ್ಥಿಕ ಪ್ರಗತಿ ಸಾಧಿಸಲಾಗಿದೆ). |
| ಆ | 2014 ರಲ್ಲಿ ಪ್ರಾರಂಭವಾದ ಈ ಕಾಮಗಾರಿಯು ಪೂರ್ಣಗೊಳ್ಳಲು ವಿಳಂಬವಾಗುತ್ತಿದ್ದು, ಕಾಮಗಾರಿಯು ತ್ವರಿತವಾಗಿ ಪೂರ್ಣಗೊಳ್ಳಲು ಸರ್ಕಾರ ಏನು ಕ್ರಮ ಕೈಗೊಂಡಿದೆ; | ಸದರಿ ಕಾಮಗಾರಿಯನ್ನು ದಿನಾಂಕ: 23-12-2015 ರಲ್ಲಿ ಪ್ರಾರಂಭಿಸಲಾಗಿದ್ದು, ಭೂಸ್ವಾಧೀನ ಪ್ರಕ್ರಿಯೆಯಿಂದ ಹಾಗೂ ಗ್ರಾವಿಟಿ ಮೈನ್ ಪಂಕ್ತೀಕರಣವನ್ನು ರೆವೆನ್ಯೂ ಭೂಮಿಯ ಬದಲಾಗಿ ರಸ್ತೆ ಬದಿಗೆ ಬದಲಾಯಿಸಿ, ಕೆಲವೊಂದು ಮಾರ್ಪಾಡುಗಳು ಉದ್ಭವಿಸಿದ್ದು ಇದರಿಂದಾಗಿ ವಿಳಂಬವಾಗಿರುತ್ತದೆ.<br><br>ಪ್ರಸ್ತುತ ಭೂಸ್ವಾಧೀನ ಪ್ರಕ್ರಿಯೆಯು ಜಾರಿಯಲ್ಲಿದ್ದು, ಸದರಿ ಕಾಮಗಾರಿಯನ್ನು 2022 ರ ಅಂತ್ಯಕ್ಕೆ ಪೂರ್ಣಗೊಳಿಸಲು ಕ್ರಮ ವಹಿಸಲಾಗುತ್ತಿದೆ. |
| ಇ | ಮಾಗಡಿ ತಾಲ್ಲೂಕಿನ ಕೆರೆಗಳಿಗೆ ನೀರಿನ ಬವಣೆ ಹೆಚ್ಚಾಗಿದ್ದು, ಹೇಮಾವತಿ ನದಿಯಿಂದ ನಾಲೆಯ ಮೂಲಕ ಹರಿಸುವ ಕುಡಿಯುವ ನೀರು ಕಾಮಗಾರಿಯು ಪೂರ್ಣಗೊಳ್ಳಲು ಎಷ್ಟು ಕಾಲಾವಧಿ ಬೇಕಾಗಬಹುದು? | |

*ಸಂಖ್ಯೆ:ಜಸಂಇ 138 ಎನ್‌ಎಲ್‌ಎ 2020*

(ರಮೇಶ್ ಲ. ಜಾರಕಿಹೊಳಿ)
ಜಲಸಂಪನ್ಮೂಲ ಸಚಿವರು